ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಸ್ಥಳಾಂತರ ಹಾಗೂ ಹಸ್ತಾಂತರ ಮಾಡಲಾದ ಶಾಲಾ ಕಾಲೇಜುಗಳ ಅನುದಾನ ಬಗ್ಗೆ

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ):-

1419 (1745) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಅನುದಾನಿತ ಶಾಲಾ ಕಾಲೇಜುಗಳನ್ನು ಸ್ಥಳಾಂತರ ಮತ್ತು ಹಸ್ತಾಂತರ ಮಾಡಲು ಇರುವ ನಿಯಮಾವಳಿಗಳೇನು;

(ಆ) ಈ ಹಿಂದೆ 2016ರವರೆಗೆ ಸ್ಥಳಾಂತರ ಹಾಗೂ ಹಸ್ತಾಂತರ ಮಾಡಲಾದ ಶಾಲಾ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲಾಗಿದೆಯೇ ; ಪ್ರಸ್ತುತ ಸ್ಥಳಾಂತರ ಮತ್ತು ಹಸ್ತಾಂತರ ಮಾಡಲಾಗುತ್ತಿರುವ ಶಾಲಾ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸದಿರಲು ಕಾರಣವೇನು ; ಈ ಹಿಂದೆ ಇದ್ದ ನಿಯಮಾವಳಿಗಳು ಹಾಗೂ ಪ್ರಸ್ತುತ ಇರುವ ನಿಯಮಾವಳಿಗೆ ನಡುವೆ ವ್ಯತ್ಯಾಸವಿದೆಯೇ ;

(ಇ) ಬಾಕಿ ಉಳಿದ ಸ್ಥಳಾಂತರ ಹಾಗೂ ಹಸ್ತಾಂತರ ಶಾಲಾ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ಸರ್ಕಾರದ ಕ್ರಮವೇನು; ಯಾವ ಕಾಲಮಿತಿಯೊಳಗೆ ಅನುದಾನಕ್ಕೆ ಒಳಪಡಿಸಲಾಗುವುದು? (ಸಂಪೂರ್ಣ ವಿವರ ನೀಡುವುದು)